ಕೆ. ಜಿ. ರೇಖಾ *

# ಮಂಡ್ಯ ಜಿಲ್ಲೆಯ ಶಾಸನಗಳಲ್ಲಿ ಜಾನಪದೀಯ ದೈವಗಳು

ಮಂಡ್ಯ ಜಿಲ್ಲೆಯ ಶಾಸನಗಳಲ್ಲಿ ಎಲ್ಲೆಡೆ ಜನಪ್ರಿಯವಾಗಿದ್ದ ಜನಪದ ದೈವಗಳ ಪ್ರಸ್ತಾಪವನ್ನು ಕಾಣಬಹುದು. ಪಾಂಡವಪುರದ ತೊಣ್ಣೂರಿನ ಶಾಸನವೊಂದರಲ್ಲಿ ''ಪಟ್ಟಣದಮ್ಮನ'' ಗುಡಿಗೆ ಬಿಟ್ಟ ಕಲ್ಲು ಎಂದು ಬರೆದಿದೆ. ಬಹುಶಃ ಇದು ಆ ಊರನ್ನು ಕಾಯುವ ಗ್ರಾಮ ದೇವತೆಯಾಗಿದ್ದು, ಆ ಗುಡಿ ಗ್ರಾಮದೇವತೆಯ ದೇವಾಲಯವಾಗಿದ್ದಿರಬಹುದು.

ಹಾಗೆಯೇ ನಾಗಮಂಗಲದ ದೇವರಹಳ್ಳಿಯ ಶಾಸನವೊಂದರಲ್ಲಿ (ಹೊಯ್ಸಳ ನರಸಿಂಹನ ಕಾಲ)[2] ''..ನಾರಸಿಂಘ ದೇವರು ನಾಗಣನಾಯಕ ಎಂಬುವರು ಗಾದೆ ದೇವಾರಿಗೆ ಕಂಬದ ಮೂಡಪಡಣ ಹೊಲನಾ ದೇವರಿಗೆ ಧಾರಿ'' ಎಂದಿದ್ದು ಸ್ವಲ್ಪ ಭೂಮಿಯನ್ನು ಧಾರೆ ಎರೆದುಕೊಟ್ಟ ಉಲ್ಲೇಖವಿದೆ.

ಇಲ್ಲಿ ಗಾದೆ ದೇವಾರಿಗೆ ನಂತರ ಹೊಲನಾ ದೇವರಿಗೆ ಎಂಬ ಅಂಶವಿರುವುದರಿಂದ ಈ ಗಾದೆ ದೇವಾರಿಗೆ ಬಹುಶಃ ಗಟ್ದೆ ದೇವಾರಿಗೆ > ಗದ್ದೆ ದೇವಾರಿಗೆ ಅರ್ಥದ ತಪ್ಪು ಪ್ರಯೋಗ ಇರಬಹುದು. ಈಗಲೂ ಸಹಾ ಹಳ್ಳಿಗಳ ಕಡೆ ಮುನಿಯಪ್ಪ, ಮುನೇಶ್ವರ ಮುಂತಾದ ದೇವತೆಗಳನ್ನು ಪೂಜಿಸುವುದನ್ನು ಈ ಸಂದರ್ಭದಲ್ಲಿ ನೆನೆಯಬಹುದು.

ಊರನ್ನು ಕಾಯುವ ಗ್ರಾಮದೇವತೆಗಳೆಂದ ಕೂಡಲೇ ಕಣ್ಣ ಮುಂದೆ ಸುಳಿಯುವ ಹೆಸರು ಮಾರಿಯದು. ಆಕೆಯ ಹೆಸರಿನಲ್ಲಿ ಒಂದು ಗುಡಿಯನ್ನು ಕಟ್ಟಿಸಿದ್ದಾರೆಂದು, ಅಲ್ಲಿಯೇ ಆಕೆಗೆ ಸಂಬಂಧಿಸಿದ ಶಾಸನವೊಂದಿದೆ[3].

''ಲಕೋಮನವರು...ಮಾಡಿದ ಕಾಯ್ಕ ಮಾರಿ ಗುಡಿ ಜೀರ್ನೋದಾರ ದೇವಾಲಯ ಕಟೂವದಕೆ ಹನುಮಂತೈನ ಮಗ ಬಿಲ್ಲೆ ತಿಂಮ್ಮೈನ ಗೊತ್ತು ಮಾಡಿ ನೀ ವೆಲ್ಲರು.....ಕೊಟ್ಟೊ ಜೀರ್ನೋಧಾರ ಮಾಡಿಶಿ ಕಟಿಶಿಯಿರುವ ದೇವಾಲಯ ಮಾರಿ ಪೂಜೆ ಮೀರ್ತದಂತೆ ಸದಾಕಾಲ ಸೇವೆ ನಡಸುತ್ತ ಸರ್ವೇಜನಾ ಸುಖಿನೋ ಭವಂತು..''

ಪಾಂಡವಪುರ ತಾಲೂಕಿನ ಶಾಸನವೊಂದರಲ್ಲಿ ''....ಪುರ ಮಾರಮನಹಳ್ಳಿಯ ಯಿ ಎರಡೂರ ಮಗ್ಗದೆಜೆ ಮದುವೆ ದೆಜೆ ಮೊರವಾಬು.....'' ಎಂದು ಮಾರಮ್ಮನ ಹೆಸರಿನಲ್ಲಿಯೇ ಒಂದು ಹಳ್ಳಿ ಇದ್ದದ್ದಕ್ಕೆ ಸ್ಪಷ್ಟವಾದ ದಾಖಲೆಯಿದೆ. ಇಂದಿಗೂ ಸಹಾ ಮಂಡ್ಯ ಜಿಲ್ಲೆಯಲ್ಲಿ ಪೂಜಿಸಲ್ಪಡುವ ಮಾರಮ್ಮನ ಪಟ್ಟಿ ದೊಡ್ಡದಾಗಿಯೇ ಇದೆ.

ಮೂಲತಃ ಈ ಮಾರಿಗೂ, ಮಾನವಶಾಸ್ತ್ರಕ್ಕೂ ಸಂಬಂಧವಿದೆ. ಪ್ರಖ್ಯಾತ ಮಾನವ ಶಾಸ್ತ್ರಜ್ಞ ರೂತ್ ಬೆನೆಡಿಕ್ಟ್ ತನ್ನ ''ಸಂಸ್ಕೃತಿಯ ರೂಪಿಕೆಗಳು'' ಎಂಬ ಪುಸ್ತಕದಲ್ಲಿ ಪ್ರಾಚೀನ ಗ್ರೀಕ್ ದೇವತೆಗಳ ಬಗೆಗೆ ಹೇಳುತ್ತಾ ಎರಡು ರೀತಿಯ ದೇವತೆಗಳಿವೆಯೆಂದೂ, ಅಪೊಲೊನಿಯನ್ ವರ್ಗಕ್ಕೆ ಸೇರಿದ ದೇವತೆಗಳು ಶಾಂತತೆಗೆ, ಸಾತ್ವಿಕತೆಗೆ ಹೆಸರಾದವು. ಡಯೊನಿಷಿಯಸ್ ವರ್ಗಕ್ಕೆ ಸೇರಿದ ದೇವತೆಗಳು

* ನಂ. ೨೪೮, ಕಾಂತರಾಗಿಣಿ, ಪೈಪ್‌ಲೈನ್ ೧ ನೇಹಂತ, ಅನಂತಮೂರ್ತಿ ಲೇ ಔಟ್, ಶ್ರೀನಗರ, ಬೆಂಗಳೂರು 560 050

1. Epigraphia Carnatica Vol. VII
2. Epigraphia Carnatica Vol VII
3. Ephigraphia Carnatica Vol VI, ಶ್ರೀರಂಗಪಟ್ಟಣ ೪೪

ವಿಕ್ಷಿಪ್ತತೆ ಮತ್ತು ಪ್ರಕ್ಷುಬ್ಧತೆ ಹೆಸರಾದವುಗಳೆಂದು ಹೇಳುತ್ತಾರೆ-ನಮ್ಮ ಪ್ರಮುಖ ಗ್ರಾಮದೇವತೆಯಾದ ಮಾರಿಯನ್ನು ಈ ಎರಡನೆಯ ವರ್ಗಕ್ಕೆ ಸೇರಿಸ ಬಹುದೆಂದು ಕಾಣುತ್ತದೆ. ಪ್ರಾಚೀನ ಗ್ರೀಕ್ ದೇವತೆಗಳಿಗೂ ಕರ್ನಾಟಕದ ಜಾನಪದೀಯ ದೈವಗಳಿಗೂ ಹೋಲಿಕೆ ಕಂಡುಬರುವುದು ಒಂದು ಗಮನಾರ್ಹ ಅಂಶ. ಜೊತೆಗೆ ಇದರಿಂದ ಮನುಷ್ಯರ ಜೀವನ ವಿಧಾನಗಳಿಗೂ ಅವರು ಪೂಜಿಸುವ ದೈವಕ್ಕೂ ಸಂಬಂಧ ವಿರುವುದನ್ನು ತಿಳಿಯಬಹುದು; ಹೇಗೆಂದರೆ ರೂತ್ ಬೆನಡಿಕ್ಟಳ ಪ್ರಕಾರ ಸಾತ್ವಿಕ ಜೀವನವನ್ನು ನಡೆಸುವ ಜನಾಂಗ ಸಾತ್ವಿಕ ದೇವತೆಗಳನ್ನು ಪೂಜಿಸುತ್ತಾರೆಂದೂ, ರೂಕ್ಷ ದೇವತೆಗಳನ್ನು ಪೂಜಿಸುವವರ ಜೀವನ ವಿಧಾನ ರೂಕ್ಷವಾಗಿರುತ್ತದೆಂದೂ ಅವಳವಾದ ಆ ಪರಂಪರೆ ಬಹುಶಃ ಇಲ್ಲಿಯೂ ಬೆಳೆದು ಬಂದಿರಬಹುದೆಂದು ನನ್ನ ಊಹೆ. ಯಾಕೆಂದರೆ ಮಾರ್ಗನ್‌ನ ಮಾನಸಿಕ ಏಕತೆಯ ತತ್ವವನ್ನು ಗಮನಿಸಿದಾಗ ಸಂಸ್ಕೃತಿ ವಿಕಾಸವಾಗುತ್ತಿದ್ದಂತಹ ಸಂದರ್ಭದಲ್ಲಿ ಮನುಷ್ಯನಿಗೆ, ಸಮಾನ ಸಮಸ್ಯೆ ಸಮಾನ ಪರಿಹಾರಗಳಿದ್ದುವೆಂದು ಹೇಳುತ್ತಾನೆ. ಹೀಗಾಗಿ ಆರಾಧನೆಯ ಉಗಮ ಎಲ್ಲ ಪರಿಸರಗಳಲ್ಲಿಯೂ ಸಮಾನವಾಗಿದ್ದಿರ ಬೇಕೆಂದು ನಾನು ಊಹಿಸುತ್ತೇನೆ. ಜೊತೆಗೆ ಶಾಸನೋಕ್ತ ಜಾನಪದ ದೈವವೊಂದನ್ನು ಮಾನವ ಶಾಸ್ತ್ರದ ಹಿನ್ನೆಲೆಯಲ್ಲಿ ನೋಡುವ ಒಂದು ಪ್ರಯತ್ನ ಇದು.

○